# 92

# ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ

ಲೇಖಕರು:

ಶ್ರೀ| ಕೆ.ಎಲ್.ಎನ್.ಉಪಾಧ್ಯಾಯ,

ಉಡುಪಿ.

1956.

ಒಂದಾಣೆ




ಮಾಲೆ

'ಒಂದಾಣೆ ಮಾಲೆ' ಪುಸ್ತಕಗಳು ಪ್ರತಿ ಶನಿವಾರ ಹೊರಡುತ್ತವೆ.
ಒಂದೊಂದು ವಾರ ಒಂದೊಂದು ಹೊಸ ಪುಸ್ತಕ. ಪ್ರತಿಯೊಂದಕ್ಕೆ
ಒಂದಾಣೆ. ಈ ಮಾಲೆಯಲ್ಲಿ, 1956ನೇ ಜೂನ್ ಮೂರನೇ
ವಾರದ ವರೆಗೆ 92 ಪುಸ್ತಕಗಳು ಹೊರಟಿವೆ.

ಏಜಂಟರಿಲ್ಲದ ಕಡೆಗಳ ಪುಸ್ತಕ ವ್ಯಾಪಾರಿಗಳು ಏಜನ್ಸಿಗಾಗಿ ಬರಕೊಳ್ಳಿರಿ

# ಒಂದಾಣೆ ಮಾಲೆಯ ಪುಸ್ತಕಗಳು ಟಪ್ಪಾಲು ಮೂಲಕ ಬೇಕಾದವರಿಗೆ

ಒಂದಾಣೆ ಮಾಲೆಯ ಪುಸ್ತಕಗಳನ್ನು ಆಯಾಯ ಸ್ಥಳದ ಏಜಂಟರಿಂದಲೇ ಪಡಕೊಳ್ಳುವುದು ಒಳ್ಳೇದು. ಇದರಿಂದ ಟಪ್ಪಾಲು ಖರ್ಚು ಉಳಿಯುವುದು.

ಏಜಂಟರು ಇಲ್ಲದ ಕಡೆಗಳಲ್ಲಿ, ಟಪ್ಪಾಲು ಮೂಲಕ ಅಪೇಕ್ಷಿಸುವವರು, ಬೇಕಾದ ಪುಸ್ತಕಗಳ ಕ್ರಯವನ್ನೂ, ಟಪ್ಪಾಲು ಖರ್ಚನ್ನೂ ಮುಂಗಡವಾಗಿ ಕಳುಹಿಸಬೇಕು. ಪ್ರತಿ ಪುಸ್ತಕದ ಬೆಲೆ ಒಂದಾಣೆ. ಸಾಧಾರಣ ಪ್ರತೀ ಮೂರು ಪುಸ್ತಕಗಳಿಗೆ ಟಪ್ಪಾಲು ಖರ್ಚು ಒಂದಾಣೆ. ಈ ಪ್ರಕಾರ ಕಳುಹಿಸಬೇಕು.

ಒಂದು ವರ್ಷದ 52 ಪುಸ್ತಕಗಳು ಬೇಕಾದವರು, ರೂ. 4–8–0 ಮುಂಗಡವಾಗಿ ಕಳುಹಿಸಿದರೆ, ಆಗಲೇ ಪ್ರಕಟವಾಗಿದ್ದ ಪುಸ್ತಕಗಳನ್ನು ಹಣ ತಲಪಿದ ಕೂಡಲೆ ಕಳುಹಿಸುವುದಲ್ಲದೆ, ಆ ಮೇಲೆ ಒಮ್ಮೆಗೆ ಪ್ರತೀ ಮೂರು ಅಥವಾ ನಾಲ್ಕು ಪುಸ್ತಕಗಳಂತೆ ಅವುಗಳು ಪ್ರಕಟವಾದ ಹಾಗೆ, ಒಟ್ಟು 52 ಪುಸ್ತಕಗಳಾಗುವ ವರೆಗೆ ಟಪ್ಪಾಲಿನಲ್ಲಿ ಕಳುಹಿಸಲಾಗುವುದು.

ವಿ. ಪಿ. ಕಳುಹಿಸಲಾಗುವುದಿಲ್ಲ.

**ಒಂದಾಣೆ ಮಾಲೆ,**

**ಪ್ರಭಾತ ಆಫೀಸು :: ರಥಬೀದಿ :: ಮಂಗಳೂರು-೧.**

# ಮುನ್ನುಡಿ

▪▪▪▪

ಅಭಿಜ್ಞಾನ ಶಾಕುಂತಲವು ಸಂಸ್ಕೃತ ಸಾಹಿತ್ಯದಲ್ಲಿ ಖ್ಯಾತಿವೆತ್ತ ನಾಟಕವು. ಅದನ್ನು ಬರೆದವನು ಕಾಳಿದಾಸ ಮಹಾಕವಿಯು. ಕಾಳಿದಾಸನು ನಾಟಕದಲ್ಲಿ ದುಷ್ಯಂತ ಶಕುಂತಳೆಯರ ಪ್ರಣಯವನ್ನು ಸುಂದರವಾಗಿ ಚಿತ್ರಿಸಿರುವನು. ರಸಪ್ರತಿಪತ್ತಿಯಲ್ಲಿ ಶೃಂಗಾರಶೇಖರನೆನಿಸಿದ ಕವಿಯು ಅಸಾಧಾರಣ ಯಶಸ್ಸನ್ನು ಪಡೆದಿರುವನು. ಇದರೊಂದಿಗೆ ಲೋಕಚರಿತವನ್ನೂ ಕವಿಯು ಅಲ್ಲಲ್ಲಿ ನಮಗೆ ಮನಗಾಣಿಸುವನು. ಅನಸೂಯ ಪ್ರಿಯಂವದೆಯರಿಗೆ (ಸಖಿಯರಿಗೆ) ಶಕುಂತಲೆಯ ಮೇಲಣ ವಾತ್ಸಲ್ಯ, ಕಣ್ವನ ಸಹಜಪ್ರೇಮ, ಶಾರ್ಜರವ ಶಾರದ್ವತರ ಧರ್ಮನಿಷ್ಠರತೆ, ಬಂದುದಕ್ಕೆ ಬಾಗಿ ನಡೆಯುವ ಅದಿತಿಯ ವಿನಯ, ದುಷ್ಯಂತನ ಶೃಂಗಾರಪ್ರಿಯತೆ ಶಕುಂತಲೆಯ ಧವಲನೇಮ ಮುಂತಾದವುಗಳ ಕುರಿತು ಲೋಕನೀತಿಗಳನ್ನೇ ಉದಾಹರಣೆಯಾಗಿರಿಸಿರುವನು. ಅವುಗಳಲ್ಲಿ ಕೆಲವನ್ನಾಯ್ದುಕೊಂಡು, ವಿವರಣೆಕೊಟ್ಟಿರುವೆನು. ಕೆಲವು ಸುಂದರ ಶಬ್ದಚಿತ್ರಗಳನ್ನೂ ಆಯ್ದುಕೊಂಡಿರುವೆನು.

ಲೇಖಕ.

▪▪▪▪▪▪▪▪

# ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ

---

ಸೂತ್ರಧಾರನು ರಂಗರಚನೆಯ ಪೂರ್ವದಲ್ಲಿ ಸಭಾಸದರನ್ನು ಕುರಿತು ಹೀಗೆ ಭಿನ್ನೈಸಿಕೊಳ್ಳುವನು:

"ಆಪರಿತೋಷಾದ್ವಿದುಷಾಂ ನಸಾಧುಮನ್ಯೇಪ್ರಯೋಗವಿಜ್ಞಾನಂ ।
ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ''

ಅಭಿನಯದ ಕುರಿತು ತನಗಿರುವ ಕೌಶಲ್ಯವನ್ನು ವಿದ್ವಾಂಸರು ಮೆಚ್ಚುವ ತನಕ ನೆಚ್ಚಿಕೊಳ್ಳಲಾಗುವದಿಲ್ಲ. ಎಂಥ ಪಳಗಿದ ನಟರಾದರೂ ತಮ್ಮ ಕುರಿತು ಪೂರ್ಣ ವಿಶ್ವಾಸವಿಟ್ಟುಕೊಳ್ಳುವದಿಲ್ಲ.

ಮೃಗಬೇಟೆಗೆ ಹೋದಾಗ ದುಷ್ಯಂತನು ಹಿಂಬಾಲಿಸಿಕೊಂಡು ಹೋದ, ಭಯಗೊಂಡ ಜಿಂಕೆಯ ಚಿತ್ರಣವು ಸ್ಪೃಹಣೀಯವಾಗಿದೆ.

ಗ್ರೀವಾ ಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ಬದ್ಧದೃಷ್ಟಿಃ ॥
ಪಶ್ಚಾರ್ಧೇನ ಪ್ರವಿಷ್ಟಃ ಶರಪತನ ಭಯಾತ್ ಭೂಯಸಾಪೂರ್ವಕಾಯಂ ।
ದರ್ಭೈರರ್ಧಾವಲೀಢೈಃ ಶ್ರಮವಿವೃತ ಮುಖ ಭ್ರಂಶಿಭಿಃ ಕೀರ್ಣವರ್ತ್ಮಾ॥
ಪಶ್ಯೋದಗ್ರ ಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂಪ್ರಯಾತಿ ॥

ದುಷ್ಯಂತನು ಅನುಧಾವಿಸಿಕೊಂಡು ಹೋಗುವಾಗ ಹರಿಣಶಿಶುವು ಕುತ್ತಿಗೆಯನ್ನು ನಾಟ್ಯದಿಂದ ಹಿಂದಕ್ಕಿರಿಸುತ್ತ, ಓಡುತ್ತಿದೆ. ಅನುಸರಿಸುತ್ತಿರುವ ರಥದಲ್ಲಿ ದೃಷ್ಟಿಯು ನಟ್ಟಿದೆ. ಬಾಣವು ತಗಲುವ ಅಂಜಿಕೆಯಿಂದ ಜಿಂಕೆಯು ಹಿಂಭಾಗವನ್ನು ಮುಂಭಾಗದಲ್ಲಿ ಮುದುಡಿಸಿಕೊಂಡಿದೆ. ದಾರಿಯಲ್ಲಿ ಅರೆತೆರೆದ ಬಾಯಿಂದ ಜಗುಲಿದ ಹುಲ್ಲು ಚೆಲ್ಲಿರುವದು. ಜಿಂಕೆಯು ನಾಗಾಲೋಟದಿಂದ ಓಡುವ ಭರದಲ್ಲಿ ಆಕಾಶದಲ್ಲೇ ಹೆಚ್ಚು ಇರುವುದಾಗಿಯೂ, ಎಲ್ಲೋ ಕೆಲವೊಮ್ಮೆ ಭೂಮಿಯ ಸ್ಪರ್ಶವನ್ನು ಹೊಂದುವುದಾಗಿಯೂ ಕಾಣುತ್ತದೆ.

ತಪೋವನವನ್ನು ಪ್ರವೇಶಿಸುವಾಗ "ವಿನೀತವೇಷೇಣ ಪ್ರವೇಷ್ಟವ್ಯಾನಿ ತಪೋವನಾನಿನಾಮ" ವಿನಯದಿಂದ ತಪೋವನಗಳನ್ನು ಪ್ರವೇಶಿಸಬೇಕೆಂಬ ಆಯೋಕ್ತಿಯನ್ನು ಕವಿಯು ಉದಾಹರಿಸಿರುವನು.

ಶಕುಂತಲೆಯ ಮೇಲೆ ರಾಜನಿಗೆ ಪ್ರೀತಿ ಉದಯಿಸುತ್ತದೆ. ರಾಜನಿಗೆ ಆಕೆಯ ಜಾತಿ ಗೊತ್ತಿಲ್ಲ. ಆಗ ಆತನು ಹೇಳುತ್ತಾನೆ:

ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ ॥
ಯದಾರ್ಯಮಸ್ಯಾಂ ಅಭಿಲಾಷಿಮೇಮನಃ ॥
ಸತಾಂಹಿಸಂದೇಹಪದೇಷುವಸ್ತುಷು
ಪ್ರಮಾಣಮಂತಃ ಕರಣಪ್ರವೃತ್ತಯಃ ॥

ಶಕುಂತಲೆಯು ಕ್ಷತ್ರಿಯರೊಡನೆ ವಿವಾಹಕ್ಕೆ ಅನುಕೂಲೆಯಾದವಳಿರಬೇಕು. ಏಕೆಂದರೆ ನನ್ನ ಪರಿಶುದ್ಧವಾದ ಮನಸ್ಸು ಈಕೆಯನ್ನು ಬಯಸುತ್ತದೆ. ಕೆಲವು ವಿಷಯಗಳಲ್ಲಿ ಸಂದೇಹ ಬಂದಾಗ ಸತ್ಪುರುಷರ ಮನಃಪ್ರವೃತ್ತಿಯೇ ಪ್ರಮಾಣವಾಗುತ್ತದೆ.

ಸೌಹಾರ್ದವು ಯಾವಾಗಲೂ ಸಮಾನ ವಯಸ್ಸು ರೂಪ ಉಳ್ಳವರೊಡನೆ ಕೂಡಿಬರುತ್ತದೆಂಬುದನ್ನು ಅನಸೂಯ ಪ್ರಿಯಂವದೆಯರಿಗೆ ಶಕುಂತಲೆಯ ಮೇಲಣ ಸ್ನೇಹವನ್ನು ವರ್ಣಿಸುತ್ತ ಕವಿಯು "ಸಮವಯೋರೂಪರಮಣೀಯಂ ಸೌಹಾರ್ದಂ" ಎನ್ನುವನು.

ವಿಡಂಬನೆಯ ಕುರಿತು ಕವಿಯ ಹೇಳಿಕೆ ಹೀಗಿರುವದು. ತನ್ನ ಅಭಿಪ್ರಾಯದ ಅಳತೆಗೋಲಿನಿಂದ ಇತರರ ಆಲೋಚನೆಗಳನ್ನು ಕಾಣುವದು ಶುದ್ಧ ವಿಡಂಬನವು. ಶಕುಂತಲೆಯು ಏಕೋ ಎತ್ತಲೋ ಸ್ನೇಹಪೂರ್ಣ ದೃಷ್ಟಿಯಿಂದ ನೋಡುತ್ತಿದ್ದರೆ ಅದು ತನ್ನ ಕಡೆಗೇ ಇರಬಹುದೆಂದು ದುಷ್ಯಂತನು ಆರೋಪಿಸಿಕೊಳ್ಳುತ್ತಾನೆ. ಇದು ಶುದ್ಧ ವಿಡಂಬನೆಗೆ ಉದಾಹರಣೆ.

ತಪೋವನವನ್ನು ಬೇಟೆಯ ನೆಪದಿಂದ ಕದಡಿಸಬಾರದೆಂದು ದುಷ್ಯಂತನು ಹೇಳುಪಲ್ಲಿ—

"ಶಮಪ್ರಧಾನೇಷು ತಪೋವನೇಷು
ಗೂಢಂ ಹಿ ದಾಹಾತ್ಮಕ ಮಸ್ತಿ ತೇಜಃ ॥

ಸ್ಪರ್ಶಾನುಕೂಲಾಃ ಇವ ಸೂರ್ಯಕಾಂತಾಃ ||
ತದನ್ಯ ತೇಜೋಽಭಿಭವಾದ್ವಮಂತಿ ||

ಶಾಂತವಾಗಿ ಕಾಣುವ ಆಶ್ರಮ ವಿಸ್ತಾರದಲ್ಲಿ ಗೂಢವಾದ ತಪೋಮಯ ತೇಜಸ್ಸು ಅಡಗಿರುವದು. ಸೂರ್ಯಕಾಂತಶಿಲೆಯು ಮುಟ್ಟಬಹುದಾಗಿದ್ದರೂ, ಸೂರ್ಯಕಿರಣಸ್ಪರ್ಶದಿಂದ ಜ್ವಲಂತವಾಗಿ ಸುಡುವದು.

ನಮಗೆ ಬೇಡವಾದವರನ್ನೆಲ್ಲ ಹೊರಗೆ ಕಳುಹಿ ನಾವೇ ನಾವು ಆದಾಗ "ಕೃತಂ ಭವತಾನಿರ್ಮಕ್ಷಿಕಂ" ಜೇನುನೊಣಗಳನ್ನು ಹೊರಗೆ ಅಟ್ಟಿದಂತಾಯಿತೆಂದು ವಿದೂಷಕನು ದುಷ್ಯಂತನೊಡನೆ ಹೇಳುವನು.

ತಮ್ಮವರನ್ನು ತಾವು 'ಭೇಷ್' ಎಂದು ಬೆನ್ನುತಟ್ಟಿಕೊಳ್ಳುವದು ಎಲ್ಲೆಲ್ಲೂ ಇದೆ. ಆ ಅಭಿಪ್ರಾಯವನ್ನೇ "ಸರ್ವಃ ಖಲುಕಾಂತಮಾತ್ಮೀಯಂ ಪಶ್ಯತಿ" 'ತಮ್ಮದಾಗಿರುವದನ್ನು ಎಲ್ಲರೂ ಅಭಿಮಾನದಿಂದ ಕಾಣುತ್ತಾರೆ.' ಎಂದು ದುಷ್ಯಂತನು ಅಂದುಕೊಳ್ಳುವನು.

ರಾಜನ ಮೇಲಣ ಅನುರಾಗಾತಿಶಯದಿಂದ ಮನಸ್ಸಿಲ್ಲದ ಮನಸ್ಸಿನಿಂದ ಮರಳುತ್ತಿರುವ ಶಕುಂತಳೆಯನ್ನು ಕವಿಯು ಹೀಗೆ ವರ್ಣಿಸುತ್ತಾನೆ:

ದರ್ಭಾಂಕುರೇಣ ಚರಣಃ ಕ್ಷತ ಇತ್ಯಕಾಂಡೇ
ತನ್ವೀಸ್ಥಿತಾ ಕತಿಚಿದೇವಪದಾನಿಗತ್ವಾ |
ಆಸೀದ್ವಿವೃತ್ತವದನಾ ಚ ವಿಮೋಚಯಂತೀ
ಶಾಖಾಸುವಲ್ಕಲಮಸಕ್ತಮಪಿ ದ್ರುಮಾಣಾಂ |

ದರ್ಭೆಯ ಹುಲ್ಲು ಕಾಲಿಗೆ ಚುಚ್ಚಿತೆಂದು ಶಕುಂತಳೆಯು ಕೆಲವು ಹೆಜ್ಜೆ ಮುಂದರಿದು ಹಾಗೇ ನಿಂತಳು. ಅದು ಹಾಗೆ ಸಿಕ್ಕದಿದ್ದರೂ ಗೆಲ್ಲಿನಲ್ಲಿ ಸೀರೆಯ ಸೆರಗು ಸಿಕ್ಕಿತೆಂದು ಆಕೆಯು ಮರಳಿನೋಡಿದಳು.

ಆದಾಯದ ಆರನೇ ಒಂದಂಶ ರಾಜನಿಗೆ ಕಂದಾಯದರೂಪದಲ್ಲಿ ದೊರಕುತ್ತಿತ್ತೆಂದು 'ನೀವಾರ ಷಷ್ಠಭಾಗಂ ಆಸ್ಮಾಕಂ ಉಪಹರಂತ್ವಿತಿ' ಎಂಬ ವಿದೂಷಕನ ಮಾತಿನಿಂದ ಸ್ಪಷ್ಟವಾಗುತ್ತದೆ.

ಮನುಷ್ಯನ ದೀಪ್ತಿಮಂತ ಗಭೀರಸ್ವರೂಪ ಬೇರೆ. ವಿಶ್ವಾಸಹುಟ್ಟಿಸುವ ರುಚಿರಸ್ವರೂಪ ಬೇರೆ. ಇವೆರಡೂ ಒಟ್ಟಾಗಿರುವದು ಅಪರೂಪ.

ದುಷ್ಯಂತನಲ್ಲಿ ಇವೆರಡೂ ಒಟ್ಟಾಗಿವೆಯೆಂದು 'ದೀಪ್ತಿಮತೋಽಪಿ ವಿಶ್ವಸನೀಯತಾಸ್ಯವಪುಷಃ' ಎಂಬ ಮಾತಿನಿಂದ ಸಿದ್ಧವಾಗುವದು.

ಸ್ನೇಹಿತರಲ್ಲಿ ಹಂಚಿಕೊಂಡ ದುಃಖವು ಸ್ವಲ್ಪವಾದರೂ ಸಹಿಸುವಂತಾಗುತ್ತದೆ. ಅನಸೂಯಾ ಪ್ರಿಯಂವದೆಯರು ಶಕುಂತಲೆಯೊಡನೆ ಹೇಳುತ್ತಾರೆ: ಅತಏವ ಖಲು ನಿರ್ಬಂಧಃ "ಸ್ನಿಗ್ಧ ಜನಸಂವಿಭಕ್ತಂ ಹಿ ದುಃಖಂ ಸಹ್ಯವೇದನಂಭವತಿ".

ದುಷ್ಯಂತನಲ್ಲಿ ಶಕುಂತಲೆಯ ಅನುರಾಗವನ್ನು ಅಭಿನಂದಿಸುತ್ತ ಪ್ರಿಯಂವದೆಯು ಹೇಳುತ್ತಾಳೆ: "ಸಮುದ್ರವನ್ನು ಬಿಟ್ಟು ಮಹಾನದಿಯು ಇನ್ನಾವ ದಿಸೆಯಲ್ಲಿ ಹರಿದೀತು?"

ಶಕುಂತಲೆಯ ಹೇಳಿಕೆಗಳನ್ನು ಚಾಚೂ ತಪ್ಪದೆ ಸಖಿಯರು ಒಪ್ಪುತ್ತಾರೆ. ಆಗ ರಾಜನು ಹೇಳುತ್ತಾನೆ "ವಿಶಾಖಾ ನಕ್ಷತ್ರಗಳು ಚಂದ್ರರೇಖೆಯನ್ನು ಅನುಸರಿಸುತ್ತವೆ."

ದುಷ್ಯಂತನು ನಿರಾಕರಿಸಬಹುದೇನೋ ಎಂದು ಶಕುಂತಳೆಯು ಶಂಕಿಸುತ್ತಿರುವಾಗ ಅನಸೂಯಾ ಪ್ರಿಯಂವದೆಯರು ಹೇಳುತ್ತಾರೆ "ಶರೀರಕ್ಕೆ ತಂಪನ್ನು ಕೊಡುವ ಬೆಳದಿಂಗಳನ್ನು ಸೆರಗು ಅಡ್ಡಹಿಡಿದು ಯಾರಾದರೂ ನಿವಾರಿಸುತ್ತಾರೆಯೆ?"

ಪ್ರಣಯೋನ್ಮುಖಳಾಗಿರುವ ಶಕುಂತಳೆಯನ್ನು ಕವಿಯು ಹೀಗೆ ವರ್ಣಿಸುತ್ತಾನೆ:

ಮುಹುರಂಗುಲಿಸಂವೃತಾಧರೋಷ್ಠಂ ।
ಪ್ರತಿಷೇಧಾಕ್ಷರವಿಕ್ಲವಾಭಿರಾಮಂ ।
ಮುಖಮಂಸವಿವರ್ತಿ ಪಕ್ಷ್ಮಲಾಕ್ಷ್ಯಾಃ
ಕಥಮಪ್ಯುನ್ನಮಿತಂ ನ ಚುಂಬಿತಂತು ॥

ತುಟಿಯನ್ನು ಬೆರಳುಗಳಿಂದ ಮುಚ್ಚುತ್ತ, ಬಾಯಲ್ಲಿ ಬೇಡ ಬೇಡವೆಂದು ಪ್ರತಿಷೇಧಾಕ್ಷರಗಳನ್ನು ಅಭಿರಾಮತವಾಗಿ ಉಚ್ಚರಿಸುತ್ತಿರುವ, ಭುಜದ ಕಡೆಗೆ ತಿರುಗಿದ ಚಂಚಲಾಕ್ಷಿಯ ಮುಖವು ಮೇಲಕ್ಕೆತ್ತಲ್ಪಟ್ಟಿತು. ಮುದ್ದಿಸಲಿಲ್ಲ.

ಆಶಾರಕ್ಕನುಗುಣವಾದ ಗುಣವೂ ಇರುತ್ತದೆ. ಸೌಮ್ಯ ಆಕೃತಿಯುಳ್ಳವರು ಗುಣವಿರೋಧಿಗಳಾಗುವದಿಲ್ಲವೆಂದು ದುಷ್ಯಂತನ ಬಗ್ಗೆ ವಿಶ್ವಾಸ ತಾಳಿ ಪ್ರಿಯಂವದೆಯು ಆಡುತ್ತಾಳೆ: "ವಿಸ್ರಬ್ಧಾ ಭವ ನತಾದೃಶಾಃ ಆಕೃತಿ ವಿಶೇಷಾಃ ಗುಣವಿರೋಧಿನೋಭವಂತಿ" .

ವಿವಾಹದಲ್ಲಿ ಕನ್ಯೆಯನ್ನು ಶ್ರೀಮಂತನಿಗೆ, ಕುಲೀನನಿಗೆ, ಗುಣವಂತನಿಗೆ ಕೊಡಬೇಕೆಂದು ಬಯಸುವದು ಸಹಜ. ತಂದೆಯು ಹೆಚ್ಚಾಗಿ ಗುಣವಂತನಿಗೆ ಹುಡುಗಿಯನ್ನು ಕೊಡಬೇಕೆಂದು ಅಪೇಕ್ಷಿಸುತ್ತಾನೆ. ಕಣ್ವನ ಅಭಿಮತವು 'ಗುಣವತೇ ಕನ್ಯಕಾಪ್ರತಿಪಾದನೀಯೇತ್ಸಯಂ ತಾವತ್ಪ್ರಥಮಃ ಸಂಕಲ್ಪಃ' ಎಂದು ಅನಸೂಯೆಯು ಹೇಳುತ್ತಾಳೆ.

ಪತಿಗೃಹಕ್ಕೆ ಶಕುಂತಲೆಯು ಹೊರಟಾಗ ಕಣ್ವನೂ ಆಕೆಯೊಡನೆ ಅಷ್ಟು ದೂರ ಹೋಗುತ್ತಾನೆ. ಆಗ ಶಾರ್ಙ್ಗರವನು ನೀರಿನಾಶ್ರಯುವ ತನಕ ಬಂಧುಜನರು ಅನುಸರಿಸಿ ಹೋಗುವರು ಎಂದು ಕಣ್ವನನ್ನು ಎಚ್ಚರಿಸುತ್ತಾನೆ.

ಶಕುಂತಲೆಗೆ ಕಣ್ವನ ಉಪದೇಶವು ಮಧುರವಾಗಿದೆ:

ಶುಶ್ರೂಷಸ್ವ ಗುರೂನ್ ಕುರುಪ್ರಿಯಸಖೀವೃತ್ತಿಂ ಸಪತ್ನೀ ಜನೇ
ಭರ್ತುಃ ವಿಪ್ರಕೃತಾಪಿ ರೋಷಣ ತಯಾ ಮಾಸ್ಮಪ್ರತೀಪಂ ಗಮಃ ||
ಭೂಯಿಷ್ಠಂ ಭವದಕ್ಷಿಣಾಪರಿಜನೇ ಭಾಗ್ಯೇಷ್ವನುತ್ಸೇಕಿನೀ ||
ಯಾಂತ್ಯೇವಂ ಗೃಹಿಣೀಪದಂ ಯುವತಯಃ ವಾಮಾಃ ಕುಲಸ್ಯಾಧಯಃ

ಹಿರಿಯರ ಆರೈಕೆ ಮಾಡು. ಸವತಿಯರನ್ನು ಗೆಳತಿಯರಂತೆ ನೋಡಿಕೊ. ಗಂಡನು ಒಮ್ಮೆ ತಪ್ಪಿನಡೆದರೂ, ಕೋಪಗೊಂಡು ನೀನು ವಿರೋಧ ತೋರಿಸಬೇಡ. ಸೇವಕರಲ್ಲಿ ದಾಕ್ಷಿಣ್ಯದಿಂದ ಇರು. ಭಾಗ್ಯದಲ್ಲಿ ವಿಶೇಷ ಆಸಕ್ತಿ ತೋರಿಸಬೇಡ. ಹೀಗಿದ್ದಾಗ ಸತಿಯರು ಗೃಹಿಣಿಯರೆಂದೆನಿಸಿಕೊಳ್ಳುವರು. ವಿಪರೀತವಾಗಿ ವರ್ತಿಸುವವರು ಕುಲಕ್ಕೆ ಪೀಡೆಯಂತಾಗುವರು.

ಓರ್ವ ರಾಜನ ಜೀವನ ಸಾರ್ಥಕತೆಯ ಬಗ್ಗೆ ಕವಿಯ ಹೇಳಿಕೆ ಹೀಗಿದೆ: "ಎಲೈ ಶಕುಂತಳೆಯೆ! ಸಮುದ್ರವೇ ಸುತ್ತುವಲಯವಾಗಿರುವ ಭೂಮಿಯು

ಸವತಿಯೆನಿಸಿ, ದುಷ್ಯಂತನಿಗೆ ಒಪ್ಪುವ ಮಗನನ್ನು ಸಿಂಹಾಸನದಲ್ಲಿರಿಸಿ, ಆತನ ಮೇಲೆ ಕುಟುಂಬ ಭಾರವನ್ನಿರಿಸಿದ ಬಳಿಕ ಶಾಂತವಾದ ಆಶ್ರಮದಲ್ಲಿ ಆಶ್ರಯವನ್ನು ಹೊಂದುವೆ."

ವಿವಾಹವಾದ ಬಳಿಕ ಹೆಣ್ಣುಮಕ್ಕಳ ಕುರಿತು ತಂದೆಯು ಯಾವ ಸ್ವಾಸ್ಥ್ಯವನ್ನು ಹೊಂದುತ್ತಾನೆಂಬುದಕ್ಕೆ ಶಕುಂತಳೆಯನ್ನು ಕಳುಹಿದ ಬಳಿಕ ಕಣ್ವನ ಸಮಾಧಾನವನ್ನು ತಿಳಿಯಬೇಕು.

ಅರ್ಥೋಹಿ ಕನ್ಯಾಪರಕೀಯ ಏವ
ತಾಮದ್ಯ ಸಂಪ್ರೇಷ್ಯ ಪರಿಗ್ರಹೀತುಃ ॥
ಜಾತೋಮಮಾಯಂ ವಿಶದಃ ಪ್ರಕಾಮಂ ॥
ಪ್ರತ್ಯರ್ಪಿತನ್ಯಾಸ ಇವಾಂತರಾತ್ಮಾ ॥

ಹೆಣ್ಣುಮಗಳು ಇನ್ನೊಬ್ಬರ ಸೊತ್ತೇ ಆಗಿರುವಳು. ಆಕೆಯನ್ನು ಅವರವರಿಗೆ ಒಪ್ಪಿಸಿಕೊಟ್ಟ ಬಳಿಕ ಅಡವಿನ ಸೊತ್ತನ್ನು ಮರಳಿಕೊಟ್ಟಂತೆ ನನ್ನ ಮನಸ್ಸು ಸ್ವಸ್ಥವಾಗಿರುವುದು.

ಹಂಸಪದಿಕೆಯ ಹಾಡನ್ನು ಕೇಳುತ್ತಿದ್ದಂತೆ ದುಷ್ಯಂತನಲ್ಲಿ ಹಲವಾರು ಭಾವನೆಗಳು ಉದ್ದೀಪನಗೊಳ್ಳುತ್ತವೆ.

ಚೆಲುವಾದ ನೋಟಗಳನ್ನು ನೋಡುತ್ತಿದ್ದಂತೆ, ಇಂಪಾದ ಗಾನವನ್ನು ಸವಿಯುತ್ತಿದ್ದಂತೆ ಸುಖದಲ್ಲಿದ್ದ ವ್ಯಕ್ತಿಯೂ ಕೂಡ ಕಾತರಗೊಳ್ಳುವನು. ಸ್ಮರಣೆಗೆ ವಿಶೇಷ ಉದ್ದೀಪಕಗಳು ಇಲ್ಲದಿದ್ದರೂ, ಮನಸ್ಸಿನಲ್ಲಿ ಸ್ಥಿರಗೊಂಡ ಭಾವವು ಜನ್ಮಾಂತರದ ಸೌಹಾರ್ದಗಳನ್ನು ನೆನೆಯುತ್ತದೆ.

ರಾಜನಲ್ಲಿ ರಾಜತ್ವವು ಪ್ರಜೆಗಳ ಯೋಗಕ್ಷೇಮವನ್ನು ನಿರ್ವಹಿಸುವುದಕ್ಕೆ, ಪ್ರಭುತ್ವವನ್ನು ಮೆರೆಸುವುದಕ್ಕಲ್ಲವೆಂದು ಕವಿಯು ನಿರೂಪಿಸಿರುವನು. ಕಂಚುಕಿಯು ದುಷ್ಯಂತನ ರಾಜ್ಯನಿರ್ವಾಹದ ನಿರಂತರ ಶ್ರಮವನ್ನು ಕಂಡು ಹೀಗೆ ಹೇಳುತ್ತಾನೆ:

ಸ್ವಸುಖ ನಿರಭಿಲಾಷಃ ಖಿದ್ಯಸೇಲೋಕಹೇತೋಃ ॥
ಪ್ರತಿದಿನಮಥವಾ ತೇ ವೃತ್ತಿರೇವಂ ವಿಧೈವ ॥

ಅನುಭವತಿ ಹಿ ಮೂರ್ಧ್ನಾ ಪಾದಪಸ್ತೀವ್ರಮುಷ್ಣಂ
ಶಮಯತಿ ಪರಿತಾಪಂ ಛಾಯಯಾ ಸಂಶ್ರಿತಾನಾಂ

ತನ್ನ ಸುಖದ ಕುರಿತು ಆಸೆಪಡದೆ ಲೋಕದ ಜನರಿಗಾಗಿ ಶ್ರಮಪಡುತ್ತಾನೆ. ಮರವು ಬಿಸಿಲಬೇಗೆಯನ್ನು ತಲೆಯಲ್ಲಿ ಹೊತ್ತು, ನೆರಳನ್ನಾಶ್ರಯಿಸಿದವರಿಗೆ ತಂಪನ್ನೀಯುವಂತೆ, ಸೂರ್ಯನು ಎಂದೋ ಒಮ್ಮೆ ರಥಕ್ಕೆ ಕುದುರೆಗಳನ್ನು ಹೂಡಿರುವನು. (ಅನಂತರ ಆತನಿಗೆ ಬಿಡುವಿಲ್ಲವೆಂದರ್ಥ) ಗಾಳಿಯು ರಾತ್ರಿ ಹಗಲೆನ್ನದೆ ಬೀಸುತ್ತಿದೆ. ಶೇಷನು ಭೂಮಿಯ ಭಾರವನ್ನು ಇವತ್ತಿಗೂ ಇರಿಸಿಕೊಂಡಿರುವನು. ಪ್ರಜೆಗಳ ಷಷ್ಠಾಂಶವನ್ನು ಸ್ವೀಕರಿಸಿ ಪ್ರಜೆಗಳ ಹೊಣೆ ಹೊತ್ತಿರುವ ರಾಜನಿಗೂ ಹಾಗೆಯೇ ಬಿಡುವಿಲ್ಲ.

ರಾಜನಿಗೂ ಪ್ರಜೆಗಳಿಗೂ ಇರುವ ಸಂಬಂಧವನ್ನು ಕವಿಯು ಹೀಗೆ ತೋರಿಸಿರುವನು:

ನಿಯಮಯಸಿ ಕುಮಾರ್ಗಪ್ರಸ್ಥಿತಾನಾತ್ತದಂಡಃ ॥
ಪ್ರಶಮಯಸಿ ವಿವಾದಂ ಕಲ್ಪಸೇ ರಕ್ಷಣಾಯ ।
ಅತನುಷು ವಿಭವೇಷು ಜ್ಞಾತಯಃ ಸಂತುನಾಮ ।
ತ್ವಯಿಪರಿಸಮಾಪ್ತಂ ಬಂಧು ಕೃತ್ಯಂ ಪ್ರಜಾನಾಂ ॥

ದುರ್ಮಾರ್ಗದಲ್ಲಿ ನಡೆವವರನ್ನು ಶಿಕ್ಷಿಸಿ ತಡೆಯುತ್ತಿ. ಪ್ರಜೆಗಳ ಒಳಜಗಳಗಳನ್ನು ಇತ್ಯರ್ಥ ಮಾಡುವೆ. ರಕ್ಷಣೆಗೆ ನೀನೇ ಒದಗುವೆ. ಐಶ್ವರ್ಯವು ಹೆಚ್ಚಿರುವಾಗ ಬಂಧುಗಳು ಬೇಕಾದಷ್ಟಿರಲಿ. ಆದರೆ, ಆಪ್ತ ಬಂಧುತ್ವವು ನಿನ್ನಲ್ಲೇ ಚರಿತಾರ್ಥವಾಗಿದೆ. ಎಂದರೆ ಬಂಧುಗಳಿಂದ ಒದಗತಕ್ಕ ಉಪಕಾರವು ನಿನ್ನಿಂದಲೇ ಆಗುವದು ಎಂದರ್ಥ.

ಶಾರದ್ವತನು ಹಸ್ತಿನಾವತಿಗೆ ಬಂದಾಗ ಆ ನಗರದ ವಾತಾವರಣವು ವನವಾಸಿಯಾದ ಅವನಿಗೆ ಒಪ್ಪುವುದಿಲ್ಲ. ಆತನು ಹೇಳುತ್ತಾನೆ:

ಅಭ್ಯಕ್ತಮಿವಸ್ನಾತಃ ಶುಚಿರಶುಚಿಮಿವ ಪ್ರಬುದ್ಧ ಇವಸುಪ್ತಂ ॥
ಬದ್ಧಮಿವ ಸ್ವೈರಗತಿಃ ಜನಮಿಗ ಸುಖ ಸಂಗಿನಮವೈಮಿ ॥

ಸ್ನಾನ ಶೀರಿದವನು ಎಣ್ಣೆಯಿಟ್ಟವನನ್ನು, ಶುಚಿಯಾದವನು ಮೈಲಿಗೆಯಲ್ಲಿರುಪವನನ್ನು, ಎಚ್ಚತ್ತವನು ಮಲಗಿದವನನ್ನು, ಸ್ವತಂತ್ರವಾಗಿರುವ

ವನು ಕೈದಿಯನ್ನು ಕಾಣುವಂತೆ ಸುಖದಲ್ಲಿರುವ ಈ ಜನಸಮೂಹವನ್ನು ಕಂಡು ಸನಗನಿಸುತ್ತದೆ.

ಮದುವೆಯಾದ ಬಳಿಕ ವಧುವನ್ನು ಮನೆಯಲ್ಲಿ ಇರಿಸಿಕೊಳ್ಳುವದು ವಿಹಿತವಲ್ಲ. ದುಷ್ಯಂತನು ಶಕುಂತಳೆಯನ್ನು ನಿರಾಕರಿಸಿದ ಬಳಿಕ ಶಾರ್ಙ್ಗರವನು ಶಕುಂತಳೆಯನ್ನು ತಮ್ಮಲ್ಲಿರಿಸಿಕೊಂಡುದೇ ಅಪರಾಧವೆಂದು ಬಗೆದನು. "ಮದುವೆಯಾದ ಬಳಿಕ ಹುಡುಗಿಯು ತವರುಮನೆಯಲ್ಲೇ ಇದ್ದರೆ ಜನರು ಆಕೆಯ ಶೀಲದ ಬಗ್ಗೆ ಸಂಶಯತಾಳುವರು. ಆದ್ದರಿಂದ ಪ್ರಿಯವಾಗಲೀ ಅಪ್ರಿಯವಾಗಲೀ ಹುಡುಗಿಯರನ್ನು ಗಂಡನ ಜೊತೆಯಲ್ಲಿಯೇ ಇರಿಸಬೇಕು.

ವಿಶ್ವಾಸವು ಸಮಾನ ರುಚಿಗಳಲ್ಲಿಯೇ ತಲೆದೋರುವದು. ದುಷ್ಯಂತನು ಶಕುಂತಳೆ ಮತ್ತು ಜಿಂಕೆಯ ವಿಶ್ವಾಸವನ್ನು ಪರಿಹಾಸ್ಯಮಾಡುತ್ತ ಸರ್ವಃ ಸಗಂಧೇಷು ವಿಶ್ವಸತಿ (ಸಮಾನಗಂಧವೇ ಪ್ರೀತಿಹುಟ್ಟಲು ಕಾರಣವಾಗುವುದು) ಎಂದು ಹೇಳುತ್ತಾನೆ.

'ತಲೆಮಾರಿನಿಂದ ಬಂದ ಉದ್ಯೋಗವು ನಿಂದಿತವಾಗಿದ್ದರೂ ಅದನ್ನು ತೊರೆಯಬಾರದು. ಯಜ್ಞಗಳಲ್ಲಿ ಪಶುಗಳನ್ನು ಹಿಂಸಿಸುವ ಪುರೋಹಿತನಾದರೂ ದಯಾವಂತನಾಗಿಯೇ ಇರುವನು' ಎಂದು ಬೆಸ್ತನು ನಗರರಕ್ಷಕರಿಗೆ ತಿಳಿಸುವನು.

ಜಾರುಗುಪ್ಪೆಯಲ್ಲಿ ಬಿದ್ದವನು ಮುಂದೆ ಜಾರುತ್ತಲೇ ಹೋಗುವಂತೆ ಒಮ್ಮೆ ತೂಕತಪ್ಪಿದರೆ ಮತ್ತೆ ಅನರ್ಥಗಳು ಒಂದರ ಹಿಂದೆ ಒಂದಾಗಿ ಒದಗುವವು. 'ರಂಧ್ರೋಪನಿಪಾತಿನಃ ಅನರ್ಥಾಃ' ಎಂಬ ಮಾತು ಈ ಸ್ವಯಂಸಿದ್ಧವಾದ ಅರ್ಥವನ್ನು ಕೊಡುವದು.

ಶಕುಂತಳೆಯ ವಿರಹದಿಂದ ಬೇಗುದಿಗೊಂಡ ದುಷ್ಯಂತನು ಬೇರೆ ಸಂತೋಷದ ದಿಸೆ ಕಾಣದೆ ಕಣ್ವಾಶ್ರಮದ ಒಂದು ಶೃಂಗಾರ ಚಿತ್ರವನ್ನು ಬರೆದು ಶಕುಂತಳೆಯ ಮಧುರ ಸ್ಮರಣೆಯನ್ನು ತಂದುಕೊಳ್ಳುತ್ತಾನೆ. ಅದರ ವಿವರ ಹೀಗಿದೆ:

ಕಾರ್ಯಾಸೈಕತಲೀನ ಹಂಸಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣ ಹರಿಣಾಃ ಗೌರೀಗುರೋಃ ಪಾವನಾಃ ||

ಶಾಖಾಲಂಬಿತ ವಲ್ಕಲಸ್ಯ ಚತರೋರ್ನಿರ್ಮಾತುಮಿಚ್ಛಾಮ್ಯಧಃ ||
ಶೃಂಗೇ ಕೃಷ್ಣಮೃಗಸ್ಯ ವಾಮನಯನಂ ಕಂಡೂಯಮಾನಾಂ ಮೃಗೀಂ ||

"ಮಾಲಿನೀ ತೀರದ ಪುಲಿನವಿಸ್ತಾರದಲ್ಲಿ ಕ್ರೀಡಿಸುತ್ತಿರುವ ಜೋಡು ಹಂಸಗಳು. ತೆರೆಗಳು ಮಡಚಿ ಮಡಚಿ ಮಂದಗಾಮಿನಿಯಾಗಿ ಹರಿಯುವ ಮಾಲಿನಿ. ಧವಲಗಂಭೀರ ಹಿಮಾಲಯದ ಪವಿತ್ರ ತಪ್ಪಲುಗಳಲ್ಲಿ ಚಿನ್ನಾಟವಾಡುವ ಜಿಂಕೆಗಳು. ಮರಗಳ ತೂಗು ಗೆಲ್ಲುಗಳಲ್ಲಿ ಆರಲು ಹಾಕಿದ ಕೇಸರಿ ವಸ್ತ್ರಗಳು. ಮರದ ಕೆಳಗೆ ಜಿಂಕೆಯು ಎಡಗಣ್ಣಲ್ಲಿ ತುರಿಕೆಯಾಡುತ್ತಿರುವ ಹೆಣ್ಣು ಜಿಂಕೆಯು.

ದೊಡ್ಡವರು ಸಾಮಾನ್ಯ ಜನರನ್ನು ಕೆಲಸಕ್ಕೆ ನೇಮಿಸಿದಾಗ ಅವರು ಪಡೆದ ಸಿದ್ಧಿಯು ಆ ಹಿರಿಯರ ಮಹಿಮಾವಿಶೇಷವೇ ಹೊರತು ಬೇರಿಲ್ಲ. ಅರುಣನು ಸೂರ್ಯದೇವನ ಸಾರಥಿಯಾಗಿದ್ದುದರಿಂದಲೇ ಕತ್ತಲನ್ನು ಹರಿಸಲು ಸಮರ್ಥನಾದನು. ಎಂದು ದುಷ್ಯಂತನು ದೇವಲೋಕದಲ್ಲಿ ತಾನು ಗಳಿಸಿದ ವಿಜಯಕ್ಕೆ ಇಂದ್ರನ ಮಹಿಮಾತಿಶಯವೇ ಕಾರಣವೆಂದು ಹೇಳುತ್ತಾನೆ.

ಸಿದ್ಧಿಯಲ್ಲಿ ಇದು ಪರಮಸಿದ್ಧಿಯೆಂದು ಮಾರೀಚಾಶ್ರಮದ ಭವ್ಯತಮ ಆವರಣದಲ್ಲಿ ಕವಿಯು ಆತ್ಮಾರಾಮನಾಗಿ ವಿಹರಿಸುತ್ತಾನೆ. ಕಲ್ಪವೃಕ್ಷಗಳು ಹೇರಳವಾಗಿ ಬೆಳೆದ ಉಪವನಗಳಲ್ಲಿ ಗಾಳಿಯಿಂದಲೇ ಮುನಿಗಳ ಜೀವನವು ಸರಾಗವಾಗಿ ನಡೆಯುತ್ತದೆ. ಚಿನ್ನದ ಕಮಲಗಳ ಪರಾಗದಿಂದ ಕಲುಷಿತವಾದ ನೀರಿನಲ್ಲಿ ಮುನಿಗಳ ಧರ್ಮಸ್ನಾನವು ಪೂರೈಸುವದು. ರತ್ನಶಿಲಾತಲಗಳಲ್ಲಿ ಧ್ಯಾನವು ರಹಸ್ಯವಾಗಿ ನಡೆಯುವುದು. ಮುನಿಗಳು ದೇವಸ್ತ್ರೀಯರ ಜೊತೆಯಲ್ಲಿದ್ದು ಇಂದ್ರಿಯಗಳನ್ನು ವಶದಲ್ಲಿಟ್ಟಿರುವರು. ಇತರ ಮುನಿಗಳು ಯಾವುದನ್ನು ತಪಶ್ಚರ್ಯೆಯಿಂದ ಬಯಸಿಪಡೆಯುವರೋ ಅಲ್ಲೇ ಇವರು ಶಾಂತ ತಪಸ್ಸನ್ನಾಚರಿಸುತ್ತಿರುವರು.

ಮಹಾತ್ಮರ ಕೋರಿಕೆಗಳು ಊರ್ಧ್ವಮುಖಿಯಾಗಿರುತ್ತವೆ. ಮಹತ್ತನ್ನೂ ಮಹತ್ತಮವನ್ನೂ ಅವರು ಬಯಸುತ್ತಾರೆ. ಅಲ್ಪತೆ, ನೀಚತೆಯ ಕಡೆಗೆ ಅವರು ಕೈಚಾಚುವುದಿಲ್ಲ. ಈ ಭೂಮ ಆರಾಧನೆಯನ್ನೇ ಕವಿಯು 'ಉತ್ಸರ್ಪಿಣೀ ಖಲು ಮಹತಾಂ ಪ್ರಾರ್ಥನಾ' ಎಂದಿರುವನು.

ಸೂತನು ಕುದುರೆಯ ಕಡಿವಾಣವನ್ನು ಸಡಿಲಿಸಿದಾಗ ಕುದುರೆಗಳ ಓಟವನ್ನು ಕವಿಯು ಸ್ವಭಾವೋಕ್ತಿಯಿಂದ ವರ್ಣಿಸಿರುವನು: ಕಡಿವಾಣವು ಸಡಿಲಾದಾಗ ಕುದುರೆಗಳು ಓಟ ಕಿತ್ತುವು. ಮುಂಚಾಚಿದ ಮೈ. ಅಲುಗಾಡದೆ ನೆಟ್ಟಗೆ ನಿಂತ ತಲೆಯ ಮೇಲಣ ಚಾಮರವು. ತಾವು ಓಡುವಾಗ ಎದ್ದ ಧೂಳೂ ಕೂಡ ತಮ್ಮನ್ನು ಮೀರಿ ಹೋಗದೆಂಬಂತೆ ಸೂರ್ಯದೇವನ ಕುದುರೆಗಳನ್ನು ಸ್ಪರ್ಧಿಸುವಂತೆ ಓಡುತ್ತಿದ್ದುವು.

ರಥವು ವೇಗದಿಂದ ಮುಂದುವರಿಯುತ್ತಿರುವಾಗ:

ಯದಾ ಲೋಕೇ ಸೂಕ್ಷ್ಮಂ ವ್ರಜತಿ ಸಹಸಾ ತದ್ವಿಪುಲತಾಂ ।
ಯದರ್ಧೇ ವಿಚ್ಛಿನ್ನಂ ಭವತಿ ಕೃತಸಂಧಾನಮಿವ ತತ್ ॥
ಪ್ರಕೃತ್ಯಾ ಯದ್ವಕ್ರಂ ತದಪಿ ಸಮರೇಖಂ ನಯನಯೋಃ ।
ನಮೇ ದೂರಂ ಕಿಂಚಿತ್ ಕ್ಷಣಮಪಿ ನಪಾರ್ಶ್ವೇ ರಥಜವಾತ್ ॥

ನಮ್ಮ ದೃಷ್ಟಿಗೆ ದೂರದಲ್ಲಿ ಸೂಕ್ಷ್ಮವಾಗಿ ಕಾಣುತ್ತಿರುವದು. ರಥವು ಬೇಗನೇ ಹತ್ತಿರ ಹೋಗುವದರಿಂದ ದೊಡ್ಡದಾಗಿ ಕಾಣುವದು. ಹತ್ತಿರದಲ್ಲಿ ಭಿನ್ನವಾಗಿದ್ದುದು, ರಥವು ಬಹುದೂರ ಹೋದ ಬಳಿಕ ಒಟ್ಟಾದಂತೆ ಭಾಸವಾಗುವದು. ಸ್ವಾಭಾವಿಕವಾಗಿ ಕುಟಿಲವಾಗಿದ್ದುದು ರಥವು ದೂರವಾದಾಗ ಸರಳವಾಗಿ ಕಾಣುವದು. ಹತ್ತಿರದಲ್ಲಿ ಯಾವುದೂ ಒಂದು ಕ್ಷಣ ಇರಲಾರದು. ರಥದ ವೇಗದಿಂದ ದೂರದಲ್ಲಿಯೂ ಉಳಿಯದು.

ಆಶ್ರಮ ಭೂಮಿಕೆಯನ್ನು ಕವಿಯು ಒಂದು ಪದ್ಯದಲ್ಲಿ ಮನೋಹರವಾಗಿ ವರ್ಣಿಸುತ್ತಾನೆ. "ಮರಗಳ ಪೊಟರೆಯಲ್ಲಿ ವಾಸವಾಗಿದ್ದ ಗಿಳಿಗಳ ಮುಖದಿಂದ ನೀವಾರಧಾನ್ಯಗಳು ಅಲ್ಲಲ್ಲಿ ಚೆಲ್ಲಿವೆ. ಇಂಗುದೀ ಫಲಗಳನ್ನು ಜಜ್ಜಿದುದರಿಂದ ಕಲ್ಲುಗಳಲ್ಲಿ ಅದರ ಪಸೆ ಹತ್ತಿಕೊಂಡಿರುವದು. ಜನರು ಹತ್ತಿರ ಸುಳಿದಾಡಿದರೂ, ಜಿಂಕೆಗಳು ವಿಶ್ವಾಸದಿಂದ ಅಲ್ಲಲ್ಲೇ ತಂಗಿರುವವು. ಋಷಿಕುಮಾರರು ನಾರುಡೆಯನ್ನು ಒಗೆದು ಒಯ್ಯುತ್ತಿರುವಾಗ ನೀರು ಧಾರೆಯಾಗಿ ಸುರಿದು, ಇದು ಆಶ್ರಮವೆಂಬುದನ್ನು ಸೂಚಿಸುತ್ತದೆ.

ಬೇಟೆಯ ಸಫಲತೆಯ ಕುರಿತು ಕವಿಯ ಹೇಳಿಕೆ ಹೀಗಿದೆ:

ಮೇದಚ್ಛೇದ ಕೃಶೋದರಂ ಲಘು ಭವತ್ಯುತ್ಥಾನಯೋಗ್ಯಂ ವಪುಃ ।
ಸತ್ವಾನಾಮಪಿ ಲಕ್ಷ್ಯತೆ ವಿಕೃತಿಮಚ್ಚಿತ್ತಂ ಭಯಕ್ರೋಧಯೋಃ ॥

ಉತ್ಕರ್ಷಃ ಸ ಚಧನ್ವಿನಾಂ ಯದಿಷವಃ ಸಿದ್ಧ್ಯಂತಿ ಲಕ್ಷ್ಯೇ ಚಲೇ ॥
ಮಿಥ್ಯೈವ ವ್ಯಸನಂ ವದಂತಿ ಮೃಗಯಾ ಮೀದೃಗ್ವಿನೋದಃ ಕುತಃ ॥

ಬೇಟೆಯಿಂದ ಚರ್ಬಿಯು ಕರಗಿ ಮೈಯು ಲಘುವಾಗುವದು. ಮೈಯು ಕೂತೇಳಲು ಹಗುರವಾಗುವದು. ಭಯ, ಕೋಪ ಮುಂತಾದ ವಿಕಾರಗಳಲ್ಲಿ ಪ್ರಾಣಿಗಳು ಹೇಗೆ ವರ್ತಿಸುವವೆಂದು ತಿಳಿಯುವದು. ಓಡುತ್ತಿರುವ ಒಂದು ಪ್ರಾಣಿಯನ್ನು ಹೊಡಿಯುವದು ಬೇಟೆಗಾರರಿಗೆ ಅದೊಂದು ಹೆಮ್ಮೆಯು. ಇಂಥ ಬೇಟೆಯನ್ನು ದುಶ್ಚಟವೆಂದು ಅಲ್ಲಗಳೆಯುವದು ಸುಳ್ಳು ಆರೋಪವೇ ಸರಿ.

ವೇಳೆಯನ್ನು ನಿಶ್ಚೈಸುವದಕ್ಕೆ ಓರ್ವ ಶಿಷ್ಯನು ಅರುಣೋದಯ ಪೂರ್ವದಲ್ಲಿ ಹೊರಗೆ ಬಂದು ನೋಡುತ್ತಾನೆ. ಆಗ ಅವನು ಕಂಡ ನೋಟವು ಭವ್ಯ ಸುಂದರವಾಗಿದೆ.

ಯಾತ್ಯೇಕತೋಽಸ್ತ ಶಿಖರಂ ಪತಿರೋಷಧೀನಾಂ ।
ಆವಿಷ್ಕೃತೋಽರುಣ ಪುರಸ್ಸರ ಏಕತೋಽರ್ಕಃ ॥
ತೇಜೋದ್ವಯಸ್ಯ ಯುಗಪತ್ ವ್ಯಸನೋದಯಾಭ್ಯಾಂ ॥
ಲೋಕೋ ನಿಯಮ್ಯತ ಇವಾತ್ಮದಶಾಂತರೇಷು ॥

ಒಂದೆಡೆ ಓಷಧಿಗಳ ಪತಿಯಾದ ಚಂದ್ರನು ಅಸ್ತಮಿಸುತ್ತಿರುವನು. ಮತ್ತೊಂದೆಡೆ ಅರುಣೋದಯದ ಬಳಿಕ ಸೂರ್ಯನು ಉದಯಿಸುತ್ತಿರುವನು. ಈಯೆರಡು ಜ್ಯೋತಿಗಳ ಉದಯಾಸ್ತಗಳಿಂದ ಲೋಕದಲ್ಲಿ ಜನರು ಸುಖಕಷ್ಟಗಳಲ್ಲಿ ಪಾಲುಗಲಿಯುವರು.

ಶಕುಂತಲೆಯು ಪತಿಗೃಹಕ್ಕೆ ಹೊರಟಾಗ ಕಣ್ವನ ದುಃಖವು ಶಮಿಯಲ್ಲಡಗಿದ ಅಗ್ನಿಯಂತೆ ಹೊರನೋಟಕ್ಕೆ ಸ್ಥಿರಗಭೀರನಾಗಿದ್ದ ಕಣ್ವನು ಒಳಗೊಳಗೆ ಕುದಿಯುತ್ತಿದ್ದನು. ಆತನು ಹೇಳುತ್ತಾನೆ.

ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ ಸಂಸ್ಪೃಷ್ಟ ಮುತ್ಕಂಠಯಾ ।
ಕಂಠಃ ಸ್ತಂಭಿತ ಬಾಷ್ಪ ವೃತ್ತಿ ಕಲುಷಃ ಚಿಂತಾಜಡಂ ದರ್ಶನಮ್ ।
ವೈಕ್ಲವ್ಯಂ ಮಮತಾವದೀ ದೃಶಮಿದಂ ಸ್ನೇಹಾದರಣ್ಯೌಕಸಃ ।
ಪೀಡ್ಯಂತ ಗೃಹಿಣಃ ಕಥಂ ನು ತನಯಾ ವಿಶ್ಲೇಷ ದುಃಖೈರ್ನವೈಃ ॥

ಶಕುಂತಳೆಯು ಹೊರಟುಹೋಗುವಳೆಂದು ನನ್ನ ಹೃದಯವು ಪ್ರೇಮಾತಿಶಯದಿಂದ ಉತ್ಕಂಠವಾಗಿರುವದು. ಅಶ್ರುವಿನಿಂದ ಕಲುಷ ಗೊಂಡ ಕಣ್ಣೋಟವು ಚಿಂತೆಯಿಂದ ಜಡವಾಗಿರುವದು. ಸ್ನೇಹದ ಕಾರಣದಿಂದ ಕಾಡಿನಲ್ಲಿರುವ ತನಗೇ ಇಷ್ಟು ದುಃಖವಾಗುವುದಾದರೆ ಸ್ವಂತ ಮಗಳನ್ನು ಕೊಟ್ಟು ಕಳುಹಿಸುವಾಗ ತಂದೆತಾಯಿಗಳಿಗೆ ಎಷ್ಟು ಶೋಕ ವಾಗಲಾರದು?

ಶಕುಂತಲೆಯು ತಪೋವನದಿಂದ ಹೊರಡುವದಕ್ಕೆ ಆಕೆಯು ನೀರೆರೆದು ಬೆಳಸಿದ ಗಿಡಮರಗಳು ಅನುಮತಿಕೊಡುವಂತೆ ಕಣ್ವನು ನಿವೇದಿಸಿಕೊಳ್ಳು ತ್ತಾನೆ. ಗಿಡಮರಗಳ ಬಗ್ಗೆ ಶಕುಂತಳೆಯು ಸೋದರ ಸ್ನೇಹವನ್ನು ಕಣ್ವನು ಸ್ಮರಿಸಿಕೊಳ್ಳುವನು.

ಪಾತುಂ ನ ಪ್ರಥಮಂ ವ್ಯವಸ್ಯತಿ ಜಲಂ ಯುಷ್ಮಾಸ್ವಪೀತೇಷುಯಾ ||
ನಾದತ್ತೇ ಪ್ರಿಯಮಂಡನಾಪಿ ಭವತಾಂ ಸ್ನೇಹೇ ನಯಾ ಪಲ್ಲವಂ ||
ಆದ್ಯೇವಃ ಕುಸುಮ ಪ್ರಸೂತಿ ಸಮಯೇ ಯಸ್ಯಾಃ ಭವತ್ಯುತ್ಸವಃ ||
ಸೇಯಂ ಯಾತಿ ಶಕುಂತಲಾ ಪತಿಗೃಹಂ ಸರ್ವೈರನುಜ್ಞಾಯತಾಂ ||

“ನಿಮ್ಮ ಕಟ್ಟೆಗೆ ನೀರೆರೆಯದೆ, ಯಾವಾಕೆ ನೀರನ್ನು ತನ್ನ ಬಾಯಿಗೆ ಒಯ್ಯುತ್ತಿರಲಿಲ್ಲ. ಅಲಂಕಾರಗಳಲ್ಲಿ ಆಸೆಯುಳ್ಳವಳಾದರೂ, ನಿಮ್ಮ ಚಿಗುರನ್ನು ಆಕೆಯು ಚಿವುಟಲಿಲ್ಲ. ತಾನು ನಟ್ಟ ಗಿಡಬಳ್ಳಿಗಳಲ್ಲಿ ಮೊದಲ ಬಾರಿ ಹೂವಾದಾಗ ಯಾವಾಕೆಗೆ ಅದೊಂದು ಉತ್ಸವವೇ ಆಗಿದ್ದಿತೋ ಅಂಥ ಶಕುಂತಳೆಯು ಪತಿಗೃಹಕ್ಕೆ ಹೊರಟಿರುವಳು. ಆಕೆಗೆ ನೀವೆಲ್ಲರೂ ಅನುಜ್ಞೆ ಕೊಡಿರಿ.”

ತಾತ ಕಾಶ್ಯಪನು ಸಮ್ರಾಟ್ ದುಷ್ಯಂತನಿಗೆ ಸತಿ ಶಕುಂತಳೆಯ ಮೂಲಕ ಕೆಳಗಣ ಸಂದೇಶವನ್ನು ಕಳುಹಿಸಿದನು.

ಅಸ್ಮಾನ್ ಸಾಧುವಿಚಿಂತ್ಯ ಸಂಯಮಧನಾನ್ ಉಚ್ಚೈಃ ಕುಲಂಚಾತ್ಮನಃ |
ಭರ್ತುರ್ವಿ ಪ್ರಕೃತ ಸಾಪಿ ರೋಷಣ ತಯಾ ಮಾಸ್ಮ ಪ್ರತೀಪಂ ಗಮಃ |
ಭೂಯಿಷ್ಠಂ ಭವದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ |
ಯಾಂತ್ಯೇವಂ ಗೃಹಿಣೀ ಪದಂ ಯುವತಯಃ ವಾಮಾಃ ಕುಲಸ್ಯಾಧಯಃ ||

ಸಂನ್ಯಾಸಿಗಳಾದ ನಮ್ಮ ಸಾಧು ಬುದ್ಧಿಯನ್ನು ಮನಸ್ಸಿಗೆ ತಂದುಕೊ. ನಿನ್ನ ಉನ್ನತ ವಂಶವನ್ನೂ ಬಗೆದು, ನಿನಗೂ ಶಕುಂತಳೆಗೂ ಬೆಳೆದುಬಂದ ಪ್ರೀತಿಬಂಧವನ್ನು ಅನುಗ್ರಹಿಸುವದು. ಅಂತಃಪುರದ ಇತರ ಸ್ತ್ರೀಯರೊಂದಿಗೆ ಈಕೆಯನ್ನೂ ನಿನ್ನವಳೆಂದು ಸಾಮಾನ್ಯಳಂತೆ ಸ್ವೀಕರಿಸು. ಇದರಿಂದ ಮೇಲಾದ ಭಾಗ್ಯೋದಯವು ಸ್ತ್ರೀಯರಿಗೆ ಅದೃಷ್ಟಾಯತ್ತವೇ ಸರಿ.

ಭಾಗ್ಯಶಾಲಿನಿಯಾದ ವಧು ಗಂಡನ ಮನೆಯಲ್ಲಿ ಕಾರ್ಯಬಾಹುಳ್ಯದಿಂದ ತವರನ್ನು ಮರೆಯುವಂತಾಗುತ್ತದೆಂದು ಕಣ್ವನು ಶಾಕುಂತಲೆಯೊಡನೆ ಹೇಳುತ್ತಾನೆ.

ಅಭಿಜನವತೋ ಭರ್ತುಃ ಶ್ಲಾಘ್ಯೇ ಸ್ಥಿತಾಗೃಹಿಣೀ ಪದೇ ।
ವಿಭವಗುರುಭಿಃ ಕೃತ್ಯೈಸ್ತಸ್ಯ ಪ್ರತಿಕ್ಷಣಮಾಕುಲಾ ॥
ತನಯಮಚಿರಾತ್ ಪ್ರಾಚೀವಾರ್ಕಂ ಪ್ರಸೂಯಚಪಾವನಂ ।
ಮಮ ವಿರಹಜಾಂ ನತ್ವಂ ವತ್ಸೇ ಶುಚಂ ಗಣಯಿಷ್ಯಸಿ ॥

ಮಹಾ ವಂಶದಲ್ಲಿ ಜನಿಸಿದ ಪತಿಗೆ ಯೋಗ್ಯ ಗೃಹಿಣಿಯೆನಿಸಿ, ಪ್ರತಿಕ್ಷಣದಲ್ಲೂ ವೈಭವದಿಂದ ಕೂಡಿದ ಅನೇಕ ಕಾರ್ಯಕಲಾಪಗಳಲ್ಲಿ ಮಗ್ನಳಾಗಿ, ಪೂರ್ವದಿಕ್ಕಿನಿಂದ ಸೂರ್ಯನುದಿಸಿದಂತೆ ಸುಯೋಗ್ಯ ಪುತ್ರನನ್ನು ಹೆತ್ತು ನಮ್ಮ ಅಗಲಿಕೆಯ ದುಃಖವನ್ನು ಗಣಿಸಲಾರೆ.

ರಾಜನ ಬಳಿ ಒಂದು ವ್ಯವಹಾರವನ್ನು ಮಂತ್ರಿಯು ತರುತ್ತಾನೆ. ಓರ್ವ ಸಮುದ್ರ ವ್ಯಾಪಾರಿಯು ಹಡಗು ಮುಳುಗಿ ಸತ್ತುಹೋದನು. ಆ ಬಡಪಾಯಿಗೆ ಮಕ್ಕಳಿಲ್ಲ. ಆತನ ದ್ರವ್ಯವೆಲ್ಲ ರಾಜನಿಗೆ ಸೇರತಕ್ಕುದೆಂದು ಮಂತ್ರಿಯ ಅಭಿಪ್ರಾಯ. ಆದರೆ ರಾಜನು ಮಕ್ಕಳಿಲ್ಲದವರ ದುರ್ದೆಸೆಗೆ ಶೋಕಪಟ್ಟನು. ಹಣವಂತನಾದ ವ್ಯಾಪಾರಿಗೆ ಅನೇಕ ಹೆಂಡಂದಿರಿರಬೇಕೆಂದು ರಾಜನ ಊಹೆ. ಅವರ ಪೈಕಿ ಯಾತಾದರೂ ಗರ್ಭಿಣಿಯರಿದ್ದರೆ ಆ ಗರ್ಭವೇ ವ್ಯಾಪಾರಿಯ ದ್ರವ್ಯಸಂಚಯಕ್ಕೆ ಉತ್ತರಾಧಿಕಾರಿಯೆಂದು ರಾಜನು ತೀರ್ಮಾನಿಸುತ್ತಾನೆ.



# 'ಒಂದಾಣೆ ಮಾಲೆಯ ಪ್ರಕಟಣೆಗಳು:

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ)
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. ಅದ್ಭುತ ತ್ಯಾಗ (ದ್ವಿತೀಯ ಮುದ್ರಣ)
೬. *ಚುನಾವಣೆ ಅರ್ಥಾತ್ ಬನಾವಣೆ
೭. *'ಬೀಡಿ ಸೇದಬೇಡಿ' ಮತ್ತು 'ಅ ಮಗು'
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ)
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. *ಶ್ರೀಕ್ಷೇತ್ರಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. *ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ)
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ)
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. *ಕರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರ (ದ್ವಿ. ಮುದ್ರಣ)
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ)
೨೩. ಸೂರ್ಯನ ಸಂಸಾರ (ಕಥೆಗಳು)
೨೪. ಭಾರತದ ಮಹಾನಗರ (ದ್ವಿ. ಮುದ್ರಣ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ದ್ವಿತೀಯ ಮುದ್ರಣ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಜಿ (ದ್ವಿತೀಯ ಮುದ್ರಣ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ
೩೫. ಶರಾಬಿನ ಪೀಪಾಯಿಗಳು (ಕಥೆ)
೩೬. ಉಪದೇಶ ಶತಕ (ನೀತಿ ವಚನಗಳು)
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ (ದ್ವಿತೀಯ ಮುದ್ರಣ)
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ. ಮುದ್ರಣ)
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. *ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನಕೋಶ
೫೦. ಪಂಡಿತನ ಪಿಟಿಲು (ಕಥೆಗಳು)
೫೧. ಭೋಗಯಾತ್ರೆ (ವಿನೋಬಾ ತತ್ತ್ವ)
೫೨. ಸಂಗ್ರಾಮಸಿಂಹ (ಐ| ಕಥೆ)
೫೩. ಧರ್ಮಶಿಕ್ಷಾ (ಧರ್ಮ ತತ್ವಗಳು)
೫೪. ಮಹಾತ್ಮ (ಗಾಂಧೀಜಿ)
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ (ಕಥೆ)
೫೭. ಅರಳಿದ ನಗು (ವಿನೋದ ಕಥೆಗಳು)
೫೮. ಸಚಿತ್ರ ಜಪಾನ್
೫೯. ಚುಟ್ಟಬಿಟ್ಟಧಿಟ್ಟ (ಏಕಾಂಕ ಪ್ರಹಸನ)
೬೦. ನಿರಪರಾಧಿ (ರಾಜಾಜಿಯವರ ಕಥೆ)
೬೧. ಭಕ್ತವಾಣಿ (ಸಂಕಲನ)
೬೨. ಜಾನಪದ ಸಾಹಿತ್ಯ
೬೩. ಡಾಕ್ಟರ್ ಆರೋಗ್ಯವರ್ (ಕಥೆ)
೬೪. ಲೌಕಿಕ ನ್ಯಾಯಗಳು
೬೫. ಶಿಶುಪಾಲ ಮಾನಭಂಗ (ನಾಟಕ)
೬೬. ಜರಾಸಂಧ ವಧೆ (ನಾಟಕ)
೬೭. ಜವಾಹರಲಾಲರ ಜೀವನ ಚರಿತ್ರೆ
೬೮. ಕರುಣೆ ಮತ್ತು ಇತರ ಕಥೆಗಳು

೧೯. ಶ್ರೀಕ್ಷೇತ್ರ ಉಡುಪಿ
೨೦. ವಿನೋದ ವಿಹಾರ (ನಗೆಹನಿಗಳು)
೨೧. ಭಾರತದ ಗತವೈಭವ
೨೨. ಸತ್ಯ ಹರಿಶ್ಚಂದ್ರ (ನಾಟಕ)
೨೩. ಸೂಕ್ತಿಗಳು.
೨೪. ಉ. ಕ. ದ ಯಕ್ಷಗಾನ ಕಲಾವಿದರು
೨೫. ದೇವರ ಸಾಮ್ರಾಜ್ಯದಲ್ಲಿ... (ಕಥೆ)
೨೬. ಕ್ರಾಂತಿಕಂಠೀರವ ಭಗತ್ ಸಿಂಘ್
೨೭. ಜಾತಕಪಠನ ಮತ್ತು ಇತರ ಕಥೆಗಳು
೨೮. ಅಮೃತವಾಣಿ(ಮಹಾಪುರುಷರ ವಚನ)
೨೯. ಮಾಯಾಮೃಗ (ಪೌರಾಣಿಕ ನಾಟಕ)
೩೦. ಡಾಕ್ಟರ್ ಗಾಂಧೀಜಿ
೩೧. ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ
೩೨. ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ಅರ್ಥ ಸಹಿತ)
೩೩. ಬೆಡಗಿನ ನಾಡು ಕೊಡಗು
೩೪. ಆಮೆಯಚಿಪ್ಪು ಮತ್ತು ಇತರ ಕಥೆಗಳು
೩೫. ಮಂಗಳೂರಿಂದ ಮಧುರೆಗೆ
೩೬. ಸತೀ ವೃಂದಾ (ನಾಟಕ)
೩೭. ಗೌತಮನ ಗೃಹತ್ಯಾಗ (ಏಕಾಂಕಗಳು)
೩೮. ಗೃಹವೈದ್ಯ (ಮನೆ ಮದ್ದುಗಳು)
೩೯. ನಮ್ಮ ನಾಟಕಗಳು
೪೦. ಜಾನಪದ ಕಥೆಗಳು
೪೧. ಕೆಲವು ಉಪಯುಕ್ತ ಸಲಹೆಗಳು
೪೨. ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ

ವಿಶೇಷ ಪ್ರಕಟಣೆ: ಮಕ್ಕಳ ಹಾಡುಗಳು

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

▪▪▪▪▪▪▪▪

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1956ನೇ ಜೂನ್ ತಿಂಗಳ ಮೂರನೇ ವಾರದ ವರೆಗೆ 92 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

92 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 1976 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಆವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ-ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಈ ವರೆಗೆ ಪ್ರಕಟವಾದ ಪುಸ್ತಕಗಳ ಹೆಸರುಗಳನ್ನು ಈ ಪುಸ್ತಕದ 15 ಮತ್ತು 16ನೇ ಪುಟಗಳಲ್ಲಿ ನೋಡಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

Edited, Printed & Published by K. V. Shenoy
at The Prabhat Printers, Ltd., Mangalore.